# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಮಾನ್ಯ ಸದಸ್ಯರ ಹೆಸರು | ಶ್ರೀ ಎಸ್. ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ) |
| 2 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 470 |
| 3 | ಉತ್ತರಿಸುವ ದಿನಾಂಕ | 10.12.2020 |
| 4 | ಉತ್ತರಿಸುವ ಸಚಿವರು | ಮಾನ್ಯ ಕಾರ್ಮಿಕ ಹಾಗೂ ಸಕ್ಕರೆ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 1978ರಲ್ಲಿ ನಿರುದ್ಯೋಗಿ ಪದವೀಧರರನ್ನು ಸ್ಟೈಪೆಂಡರಿ ಮೂಲಕ ವಿವಿಧ ಇಲಾಖೆಗಳಲ್ಲಿ ನೇಮಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ನಿರುದ್ಯೋಗಿ ಪದವೀಧರರನ್ನು ಸ್ಟೈಪೆಂಡರಿ ಮೂಲಕ ವಿವಿಧ ಇಲಾಖೆಗಳಲ್ಲಿ 1978ರಲ್ಲಿ ನೇಮಿಸಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | 1988ರಲ್ಲಿ ಸ್ಟೈಪೆಂಡರಿ ಪದವೀಧರರಿಗೆ ಶೇ. 50ರಷ್ಟು ಮೀಸಲಾತಿ ನೀಡಲು ತೀರ್ಮಾನಿಸಿ ಇಲಾಖೆಗೆ ನೇಮಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಇಂತಹ ನೇಮಕಾತಿಯನ್ನು ಕಾರ್ಮಿಕ ಇಲಾಖೆಯಲ್ಲಿ ಮಾಡಿಕೊಂಡಿರುವುದಿಲ್ಲ. |
| ಇ) | ಸ್ಟೈಪೆಂಡರಿ ಪದವೀಧರರು ಸುಮಾರು 12,13 ವರ್ಷಗಳು ಮಿತ ವೇತನ ಪದವೀಧರರಾಗಿ ಸೇವೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಸ್ಟೈಪೆಂಡರಿ ಪದವೀಧರರು ಸುಮಾರು 12, 13 ವರ್ಷಗಳು ಮಿತ ವೇತನ ಪದವೀಧರರಾಗಿ ಕಾರ್ಮಿಕ ಇಲಾಖೆಯಲ್ಲಿ ಸೇವೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಈ) | ಸ್ಟೈಪೆಂಡರಿ ಪದವೀಧರರು ಹಾಗೂ ದಿನಗೂಲಿ ನೌಕರರ ಅರ್ಹ ಸೇವೆಯನ್ನು ನಿವೃತ್ತಿ ಪಿಂಚಣಿಗೆ ಪರಿಗಣಿಸುವ ಸಂಬಂಧ ಮಾನ್ಯ ಕೆ.ಎ.ಟಿ. ನ್ಯಾಯಾಲಯದಲ್ಲಿ ದಿನಾಂಕ: 24.10.2020ರಲ್ಲಿ ತೀರ್ಪು ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೆ.ಎ.ಟಿ. ನ್ಯಾಯಾಲಯದ ಆದೇಶ ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. |
| ಉ) | ಬಂದಿದ್ದಲ್ಲಿ, ಈ ತೀರ್ಪಿನಲ್ಲಿ ನಿವೃತ್ತಿ ನೌಕರರ ಅರ್ಹ ಸೇವೆಯನ್ನು ಸೇವಾ ಪಿಂಚಣಿಗೆ ಪರಿಗಣಿಸಲು ತಿಳಿಸಲಾಗಿದೆಯೇ; (ವಿವರ ಒದಗಿಸುವುದು) | ಪ್ರಶ್ನೆ ಉದ್ಭವಿಸುವುದಿಲ್ಲ. |
| ಊ) | ಮಿತ ವೇತನದಲ್ಲಿ ನಿರ್ವಹಿಸಿರುವ ಸೇವೆಯನ್ನು ಪರಿಗಣಿಸಿ, ಪಿಂಚಣಿ ಸೌಲಭ್ಯ ನೀಡುವಂತೆ ಆದೇಶದಲ್ಲಿ ತಿಳಿಸಿದ್ದರೂ ಸಹ ಸರ್ಕಾರದಿಂದ ಯಾವುದೇ ಕ್ರಮ ಕೈಗೊಳ್ಳದಿರಲು ಕಾರಣವೇನು: | |

| | | |
|---|---|---|
| ಋ) | ಪ್ರಸ್ತುತ ಯಾವ ರೀತಿ ಅರ್ಹ ಸೇವೆಯನ್ನು ಪರಿಗಣಿಸಲಾಗಿದೆ; (ವಿವರ ಒದಗಿಸುವುದು) | ಮಾನ್ಯ ಸರ್ವೋಚ್ಚ ನ್ಯಾಯಾಲಯವು ಈ ಹಿಂದೆ ರಿಟ್ ಅರ್ಜಿ ಸಂಖ್ಯೆ: 1249/89ರಲ್ಲಿ ದಿನಾಂಕ: 26.08.1993ರಂದು ನೀಡಿದ ಆದೇಶದನ್ವಯ ಮಿತವೇತನ ಪದವೀಧರರಾಗಿ ಸಲ್ಲಿಸಿದ ಸೇವೆಯನ್ನು ದಿನಾಂಕ: 01.05.1991ರಿಂದ ಅನ್ವಯಿಸಿ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದ್ದು, ಈ ಮೇರೆಗೆ ಆದೇಶ ಸಂಖ್ಯೆ: ಎಸ್ ಡಬ್ಲ್ಯೂಎಲ್ 18 ಎಲ್ ಇ ಟಿ 94 ದಿನಾಂಕ: 08.01.1998ನ್ನು ಹೊರಡಿಸಲಾಗಿದೆ.<br><br>ಮುಂದುವರೆದು, ಮಾನ್ಯ ನ್ಯಾಯಾಲಯಗಳ ಆದೇಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಆಇ 09 ಎಸ್ ಆರ್ ಎ 2012 ದಿನಾಂಕ: 08.09.2016 ಮತ್ತು ಸರ್ಕಾರದ ಆದೇಶ ಸಂಖ್ಯೆ: ಆಇ 04 ಎಸ್ ಆರ್ ಎ 2016 ದಿನಾಂಕ: 10.04.2017ರಂತೆ ಪ್ರಾರಂಭದಲ್ಲಿ ದಿನಗೂಲಿ ಅಥವಾ ಮಿತವೇತನ ಪದವೀಧರರಾಗಿ ಸೇವೆ ಸಲ್ಲಿಸಿ ತದನಂತರ ಸೇವೆಯಲ್ಲಿ ಕ್ರಮಬದ್ಧಗೊಳಿಸಲಾದ ಎಲ್ಲಾ ಸರ್ಕಾರಿ ನೌಕರರಿಗೆ ಕೆ.ಸಿ.ಎಸ್.ಆರ್. ನಿಯಮ 247–ಎ ರನ್ವಯ ನಿಯಮಾನುಸಾರ ಲಭ್ಯವಾಗುವ ಅಧಿಕ ಅರ್ಹತಾದಾಯಕ ಸೇವಾ ಸೌಲಭ್ಯವನ್ನು ಸಹ ವಿಸ್ತರಿಸಿ ಪರಿಗಣಿಸಲಾಗಿದೆ. |
| ಎ) | ಮಾನ್ಯ ಕೆ.ಎ.ಟಿ. ನ್ಯಾಯಾಲಯದ ತೀರ್ಪಿನಂತೆ ಯಾವ ಕಾಲಮಿತಿಯೊಳಗೆ ಈ ನಿವೃತ್ತಿ ನೌಕರರಿಗೆ ನ್ಯಾಯ ದೊರಕಿಸಲಾಗುವುದು? | ಕೆ.ಎ.ಟಿ. ನ್ಯಾಯಾಲಯದ ಆದೇಶ ಸರ್ಕಾರದಲ್ಲಿ ಸ್ವೀಕೃತಿಯಾಗಿರುವುದಿಲ್ಲ. |

ಕಾಇ 149 ಎಲ್‌ಡಬ್ಲ್ಯೂಎ 2020.

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಮತ್ತು ಸಕ್ಕರೆ ಸಚಿವರು.